KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಡಿಸೆಂಬರ್ ೩೦, ೨೦೧೦ (ಪುಷ್ಯ ೯, ಶಕ ವರ್ಷ ೧೯೩೨) | ಸಂಚಿಕೆ ೫೧ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 205 ಡಿಟಿಇ 2010(ಭಾಗ), ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2010**

ಕರ್ನಾಟಕ ಲೋಕಸೇವಾ ಆಯೋಗದಿಂದ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ಸಿವಿಲ್ ಇಂಜಿನಿಯರಿಂಗ್ ವಿಭಾಗದ ಪ್ರಾಧ್ಯಾಪಕರ ಹುದ್ದೆಗೆ ಆಯ್ಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಗೆ ರೂ.16400–22400 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಮುಂದೆ ಸೂಚಿಸಿರುವ ಸ್ಥಳಕ್ಕೆ ಸ್ಥಳನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ: ಶ್ರೀಮತಿ | ನೇಮಿಸಲಾದ ಸ್ಥಳ |
|---|---|---|
| 1 | 2 | 3 |
| 1. | ಡಾ: ಜ್ಯೋತಿ ಪ್ರಸಾದ್,<br>ಅಸೋಸಿಯೇಟ್ ಪ್ರೊಫೆಸರ್,<br>ಸಿವಿಲ್ ಇಂಜಿನಿಯರಿಂಗ್ ವಿಭಾಗ, ಕಾಲೇಜ್ ಆಫ್ ಟೆಕ್ನಾಲಜಿ,<br>ಜಿ.ಬಿ. ಪಂತ್ ಯೂನಿವರ್ಸಿಟಿ ಆಫ್ ಅಗ್ರಿಕಲ್ಚರ್ & ಟೆಕ್ನಾಲಜಿ,<br>ಪಂತನಗರ್, ಉತ್ತರಖಂಡ ರಾಜ್ಯ–263145 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ರಾಯಚೂರು. |

ಸದರಿ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೊಳಪಟ್ಟಿರುತ್ತವೆ.

1) ಇವರನ್ನು ಎರಡು ವರ್ಷಗಳ ಪರಿವೀಕ್ಷಣಾ ಅವಧಿಗೆ ಒಳಪಡಿಸಲಾಗಿರುತ್ತದೆ.
2) ಈ ನೇಮಕಾತಿ ತಾತ್ಕಾಲಿಕವಾಗಿದ್ದು ಆಗಿಂದಾಗ್ಗೆ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3) ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ಹಾಗೂ ನಡತೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4) ಕರ್ನಾಟಕ ಸೇವಾ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಗಳ (1974)ರ ಅಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಇತರೆ ಪರೀಕ್ಷೆಗಳಲ್ಲಿ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5) ಇವರ ಸೇವಾ ಜೇಷ್ಠತೆಯು ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗದ ಆಯಾಯ ವಿಷಯದಲ್ಲಿ ನಿರ್ಧರಿಸಿದಂತೆ ಇರತಕ್ಕದ್ದು. ನಂತರ ಕರ್ನಾಟಕ ಲೋಕಸೇವಾ ಆಯೋಗವು ಕ್ರೋಢೀಕೃತ ಜೇಷ್ಠತಾ ಪಟ್ಟಿಯಲ್ಲಿ ನಿಗದಿಪಡಿಸಿದಂತೆ ಹಾಗೂ ತದನಂತರ ಹಾಗೂ ಸರ್ಕಾರ ಹೊರಡಿಸುವ ಅಧಿಸೂಚನೆಯಲ್ಲಿ ಇರತಕ್ಕದ್ದು.

6) ಇವರ ನೇಮಕಾತಿಯು ಪ್ರಸ್ತಾಪಿತ ಪ್ರಾಧ್ಯಾಪಕರ ಹುದ್ದೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ:1927/09, 1929–1959/09, 1381–1383/10 ಮತ್ತು 5597–5600/2010, 1824/2010 ರಲ್ಲಿನ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

7) ನೇಮಿಸಲಾದ ಸ್ಥಳಗಳಿಗೆ ನೇಮಕಾತಿ ಆದೇಶವನ್ನು ಸ್ವೀಕರಿಸಿದ 15 ದಿನಗಳೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

8) ಗುಣ ನಡತೆ ಪ್ರಮಾಣ ಪತ್ರ ಬಂದಿಲ್ಲದಿರುವ ಪ್ರಕರಣಗಳಲ್ಲಿ ಗುಣ ನಡತೆ ಪ್ರಮಾಣ ಪತ್ರ ಬಂದಾಗ ಅದರಲ್ಲಿ ನ್ಯೂನತೆ ಕಂಡುಬಂದಲ್ಲಿ ನೇಮಕಾತಿ ಆದೇಶ ತಂತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಜಗದೀಶ್**

ಪಿ.ಆರ್.795

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು–83**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ4–ಬಬಪಾ–ವಾನಿ–ಸಿಆರ್–1/2010–11, ದಿನಾಂಕ:16ನೇ ಡಿಸೆಂಬರ್, 2010**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2011–12ನೇ ಸಾಲಿಗೆ ಬನ್ನೇರುಘಟ್ಟ ಜೈವಿಕ ಉದ್ಯಾನವನದ ವಾಹನ ನಿಲ್ದಾಣದಲ್ಲಿ ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ಮೃಗಾಲಯ ಪ್ರಾಧಿಕಾರವು ನಿಗದಿಪಡಿಸಿದ ದರದಲ್ಲಿ ವಾಹನ ನಿಲ್ದಾಣದ ನಿರ್ವಹಣೆ ಮತ್ತು ಶುಲ್ಕ ಸಂಗ್ರಹಿಸಲು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಸದರಿ ಟೆಂಡರ್‌ನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ:30.01.2011ರಂದು ಮಧ್ಯಾಹ್ನ 3.00 ಗಂಟೆ ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಿದೆ.

**ಷೆಡ್ಯೂಲ್ ದಿನಾಂಕ ಮತ್ತು ಸಮಯ:**

1) ಗುತ್ತಿಗೆದಾರರು ಟೆಂಡರ್ ಫಾರಂನ್ನು ನಿಗದಿಪಡಿಸಲಾದ ಟೆಂಡರ್ ಫಾರಂ ಶುಲ್ಕ ರೂ.568/– (ತೆರಿಗೆಗಳು ಸೇರಿ) ಹಣ ಪಾವತಿಸಿ ದಿನಾಂಕ:27.01.2011 ರಿಂದ 29.01.2011 ರವರೆಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

2) ಮೊಹರಾದ ಟೆಂಡರ್‌ಗಳನ್ನು ದಿನಾಂಕ:30.01.2011ರ ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 3.00 ವರೆಗೆ ಸ್ವೀಕರಿಸಲಾಗುವುದು ಹಾಗೂ ಸಾಯಂಕಾಲ 3.00 ಗಂಟೆಯ ನಂತರ ಸಲ್ಲಿಸಿದ ಮೊಹರಾದ ಟೆಂಡರ್ ಫಾರಂಗಳನ್ನು ಯಾವುದೇ ಕಾರಣದಿಂದ ಸ್ವೀಕರಿಸಲಾಗುವುದಿಲ್ಲ.

3) ಮೊಹರಾದ ಟೆಂಡರ್ ಲಕೋಟೆಯನ್ನು ದಿನಾಂಕ:30.01.2011ರಂದು ಸಾಯಂಕಾಲ 4.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳು ಟೆಂಡರನ್ನು ತೆರೆಯುವರು.

**ಷರತ್ತುಗಳು:**

1) ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಟೆಂಡರುದಾರರಿಗೆ ಯಾವುದೇ ಸಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತದೆ.

2) ಗುತ್ತಿಗೆದಾರರು ರೂ.1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ಗಳ ಇ.ಎಂ.ಡಿ. (ಇಡಗಂಟು) ಅನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.

3) ಯಾವುದೇ ಟೆಂಡರಿಗೆ ಇಡಗಂಟು ಸಲ್ಲಿಸದೇ ಇದ್ದರೆ ಅದನ್ನು ತಿರಸ್ಕರಿಸಲಾಗುವುದು.

4) ಟೆಂಡರ್ ವಿಷಯದಲ್ಲಿ ಯಾವುದೇ ವಿವರಗಳು/ ಷರತ್ತುಗಳು/ ಸ್ಪಷ್ಟೀಕರಣವನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ನೇರವಾಗಿ ಬಂದು ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು,

ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು–83.

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**BRIEF TENDER NOTIFICATION**

**No.A4-BBP-VP-CR-1/2010-11, Dated:16th December, 2010**

It is hereby notified for the general information to the public that sealed tenders are invited and will be received by the Executive Director & Conservator of Forests, Bannerghatta Biological Park, Bangalore or any other officer duly authorized by him for "License to operate the Vehicle Parking Stand at Bannerghatta Biological Park for one year" i.e. for 2011-12 on 30.01.2011.

**The Schedule Dates and Times:**

1) The tender forms will be available in the office of the undersigned during the office hours from 27.01.2011 to 29.01.2011 on payment of Rs.568/- (including taxes).
2) Last date for receipt of sealed tender forms from 10:00 AM to 3:00 PM on 30.01.2011. No tender forms will be received after 3:00 P.M. on 30.01.2011.
3) Tenders will be opened by the Executive Director, BBMP (Tender Inviting Authority) or an authorised officer by him on 30.01.2011 at 4.00 PM in presence of the concerned tenderers.

**Conditions:**

1) The tender accepting authority reserves the right to accept or reject any or all tenders without incurring any liability or obligation to inform the applicants of the reasons for such action.
2) The tender should be accompanied with EMD of Rs.1,00,000/- (Rupees one lakh only) which shall be in the form of Demand Draft from Nationalized Bank of Scheduled Approved banks as noted in the schedule of the Reserve Bank of India. The DD should be in favour of "The Executive Director, Bannerghatta Biological Park, Bangalore-560083". DD in the form of Xerox copy shall not be accepted at any cost and shall stand rejected.
3) Any tender submitted without the earnest money deposit (EMD) shall summarily rejected.
4) Other detailed conditions can be had from the office of the undersigned during the office hours on all working days.

Executive Director,

PD-182

Bannerghatta Biological Park, Bangalore-83.

**IN THE COURT OF THE IV ADDL. CITY CIVIL JUDGE MAYO HALL, BANGALORE: CCH-21**

**P & S.C. NO.25049/2010 HG:24/01/2011**

**PETITIONER:**

1) Smt. Kodhanatchi W/o Late Subramani 60 yrs.
2) Sri Loganathan S/o Late Subramani 36 yrs.
3) Smt Kavitha D/o Late Subramani 34 yrs.
4) Smt. Prabha D/o Late Subramani 33 yrs.
5) Parthiban S/o Late Subramani 30 yrs All are residing at No.2, 3rd Main, 2nd Stage, Gowthamapuram, Ulsoor, Bangalore-8.

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court under Sec. 372 of the Indian Succession Act, for grant of Succession Certificate in respect of amount of deceased Subramani who died on 01.12.07 at Bangalore.

Be it known that No caveat has been entered and the said petition is posted for hearing on 24.01.2011 at 11 'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

Equity shares fully paid under certificate No.52051 pertaining to 100 shares bearing Register No.3E5060269 Distinctive No.(S) 003120500-0031205100 Dated:24th February 1995.

Given under my hand and the seal of the Court, this the 9th Day of December, 2010.

By Order of the Court

PD-179

Assistant Registrar,

City Civil Court Mayohall Unit, Bangalore.

**IN THE COURT OF THE IV ADDL. CITY CIVIL JUDGE MAYO HALL, BANGALORE: CCH-21**

**P & S.C. NO.25048/2010 HG:28/01/2011**

**PETITIONER:**

1) Mr. Sydney Mendens S/o Late Raymond Mendens 74 yrs.
2) Mr. Dilip Mendens S/o Sydney Mendens 41 yrs.
3) Miss Priya Mendens D/o Sydney Mendens 38 yrs.
4) Mr. Deepak Mendens S/o Sydney Mendens 36 yrs. All the above petitioners 1 to 4 are residing at: No.1 Clapham Street, Richmond Town, Bangalore-25.

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court under Sec. 372 the Indian Succession Act, for grant of Succession Certificate of estate of the deceased Mrs. Eleanor Jane clare Pinto Who died on 22.07.1992 at Bangalore.

Be it known that No caveat has been entered and the said petition is posted for hearing on 28.01.2011 at 11 'O clock. Any person's claiming to have any interest may come and participate in the proceedings before grant of Succession Certificate.

**SCHEDULE**

Share Certificate of different Companies.

1) Singer India Limited
2) Steelage Industries Limited now Known as Gunnebo India Ltd.,
3) Gujarat Narmada Valley Fertilizers company Limited.
4) Asian Paints India Limited.
5) The Tata Power Company Limited.

Given under my hand and the seal of the Court, this the 9$^{th}$ Day of December, 2010.

By Order of the Court
Assistant Registrar,
City Civil Court Mayohall Unit, Bangalore.

PD-180

**FORM - IV**

**(See Rule 12)**

**NOTICE**

It is hereby notified that the undersigned has changed his name from **B.K. THIPPANNA** to **B.K. VASANTHKUMAR.**

PD-144 **B.K. THIPPANNA**

**FORM - IV**

**(See Rule 12)**

**NOTICE**

It is hereby notified that the undersigned I have changed my name from **IRANNA S/O NINGARADDISHAGANI** to **IRANNANINGARADDI SHREERADDY.**

PD-146 **IRANNA S/O NINGARADDISHAGANI**

**ರಾಜ್ಯ ಲೆಕ್ಕಪತ್ರ ಇಲಾಖೆ**

**ನಿಯಂತ್ರಕರ ಕಛೇರಿ, ರಾಜ್ಯಲೆಕ್ಕಪತ್ರ ಇಲಾಖೆ, ಬೆಂಗಳೂರು**

**ನಮೂನೆ – 1**

**(ನಿಯಮ 9)**

**ಅಧಿಸೂಚನೆ**

ಶ್ರೀಮತಿ ಪಾರ್ವತಿ ಜಿ. ಭಟ್ಟ, ಸಹಾಯಕ ನಿಯಂತ್ರಕರ ಕಛೇರಿ, ಸ್ಥಳೀಯ ಲೆಕ್ಕಪರಿಶೋಧನಾ ವರ್ತುಲ, ಧಾರವಾಡ, ಇಲ್ಲಿ ಪ್ರಥಮ ದರ್ಜೆ ಸಹಾಯಕರು, ಇವರಿಗೆ ಶ್ರೀಮತಿ ಪಾರ್ವತಿ ದತ್ತಾತ್ರೇಯ ಹೆಗಡೆ ಎಂದು ಹೆಸರು ಬದಲಾವಣೆ ಮಾಡಲು ಅನುಮತಿ ನೀಡಲಾಗಿದೆ.

**K. SHIVARAMA**
CONTROLLER
STATE ACCOUNTS OF
DEPARTMENT, BANGALORE.

PD-145

**IN THE COURT OF IInd Addl. THE DISTRICT JUDGE AT TUMKUR**

**P & SC.No.90/2010**

**PETITIONER:** T.V. CHIKKAKRISHNA
S/o Venkatesha,
Aged about 29 years, residing at
B.M. Tota, K.R. Extension, Tumkur-1.

**V/s**

**RESPONDENT : NIL.**

**NOTICE**

The petitioner filed a petition Under Sec.276 of Indian Succession Act seeking grant of probate certificate in his favour and to obtain all the necessary revenue documents in his favour pertaining to the following properties, and other reliefs.

All the piece and parcel of the Red titled roofed residential house constructed in Sy.No.10/12 measuring East-West: 10.5 feet and North-South:23 feet, formed in site No.16, situated at Tumkur Kasaba Tumkur Taluk, bounded by:

EAST: Kodige Land,
WEST: House of Venkatamma,
NORTH: Land belongs to contractor Rangaiah,
SOUTH: Road.

Take Notice that the above said case is posted before the Hon'ble Court, posted on 03.01.11 to decide the said petition at 11-00 'O' clock. If any persons interested in respect of Schedule property can appear either in person or through Advocate on the said date and time. Failing which the said case will be decided Ex-parte.

Given Under my hand and seal of this Court this day of 06.12.2010.

By the Order of this Court,
Chief Administrative Officer, District
and Sessions Judge, Tumkur.

PD-178

**IN THE CITY OF IV ADDL. CITY CIVIL JUDGE MAYO HALL AT BANGALORE**

**G & WC.No.25014/2010**

**BETWEEN:**

1) Ku. Varsha P. Gowda
Aged about 14 years.
2) Kum. Harshitha P. Gowda.
Aged about 12 years
Both daughters of Sri. B.K. Prakash
Minor represented by their father & Natural Guardian Sri B.K. Prakash
3) Sri B.K. Prakash
Major
S/o Kalappa
All residing at No.21, Appaji Building, Malathahalli, Bangalore-560056. Petitioners

AND

NIL Respondent

**PUBLIC NOTICE**

Whereas notice is hereby given that a petition as been made to this court under section 8 of Guardian and Wards Act-1980. Prays for appoint the third petitioner as Guardian of the person and property of the minor petitioner 1 and 2 and permit the petitioner to sell the schedule property and to invest the proceed in a better securities, on such terms and conditions.

Be it to know that no caveat has been entered and the said petition is posted for hearing on 17.01.2011 at 11.00 AM any person/s claiming to have any interest may come and participate in the proceeding before appointing as guardian.

**SCHEDULE**

All that piece and parcel of vacant site bearing No.403, measuring east to 62.6 feet and north to south to 40 feet, situated at ITI Employees House Building Co-operative Society Ltd., Layout, Nayandanahalli, Kengeri Hobli, Bangalore South Taluk, now within the limits of BBMP and bounded on:

East by: Road

West by: Private Property

North by: Site No.404

South by: Site No.402

**SCHEDULE-B**

All the piece and parcel of 25 Squire of RCC building Constructed by 3rd petitioner on the A-Schedule Property and now under the possession of the mortgage agreement holder.

Given Under my hand and seal of this Court this the 15th day of December, 2011.

Asst. Registrar,

PD-181 City Civil Court, Mayo Hall Unit, Bangalore.

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ), ತುಮಕೂರು**

**ಸಂಖ್ಯೆ: ತೋಉನಿ:ಹಿಸತೋನಿ:ರಾವ:ತು:ತಾಸ:24:2010–11, ದಿನಾಂಕ:8ನೇ ಡಿಸೆಂಬರ್, 2010**

**ಹುಣಸೆ ಫಸಲು ವಿಲೇವಾರಿಗೆ ಟೆಂಡರ್ ಯಾ ಹರಾಜು ಪ್ರಕಟಣೆ**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ತುಮಕೂರು ರವರ ವ್ಯಾಪ್ತಿಯಲ್ಲಿರುವ ಕೆಳಕಂಡ ಕ್ಷೇತ್ರಗಳ 2010–11ನೇ ಸಾಲಿನ ಹುಣಸೆ ಫಸಲು ವಿಲೇವಾರಿ ಮಾಡಲು ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್ ಯಾ ಬಹಿರಂಗ ಹರಾಜು ಪ್ರಕಟಣೆ ಹೊರಡಿಸಿದೆ. ಟೆಂಡರ್ ಯಾ ಬಹಿರಂಗ ಹರಾಜು ಪ್ರಕ್ರಿಯೆಯನ್ನು ಕೆಳಗಿನಂತೆ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಕ್ಷೇತ್ರದಲ್ಲಿ ಫಸಲನ್ನು ವೀಕ್ಷಿಸಿ ನಂತರ ಸದರಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ ನರ್ಸರಿ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ (ಸಂಜೆ 5.00 ಗಂಟೆ ಒಳಗೆ) | ಟೆಂಡರ್ ಯಾ ಹರಾಜು ದಿನಾಂಕ ಮತ್ತು ವೇಳೆ |
|---|---|---|---|---|
| 1. | ಕುಣಿಗಲ್ ನರ್ಸರಿ, ಕುಣಿಗಲ್ ತಾಲ್ಲೂಕು | 500–00 | 10.01.2011 | 11.01.2011 ಬೆಳಿಗ್ಗೆ 11.00 ಗಂಟೆಗೆ |
| 2. | ಜಿಲ್ಲಾ ನರ್ಸರಿ, ತುಮಕೂರು | 500–00 | 11.01.2011 | 12.01.2011 ಬೆಳಿಗ್ಗೆ 11.00 ಗಂಟೆಗೆ |
| 3. | ರಾಜವಂತಿ ತೋಟಗಾರಿಕೆ ಕ್ಷೇತ್ರ, ಪಾವಗಡ ತಾಲ್ಲೂಕು. | 500–00 | 12.01.2011 | 13.01.2011 ಬೆಳಿಗ್ಗೆ 11.30 ಗಂಟೆಗೆ |
| 4. | ಶಿರಾ ನರ್ಸರಿ, ಶಿರಾ ತಾಲ್ಲೂಕು | 500–00 | 13.01.2011 | 15.01.2011 ಬೆಳಿಗ್ಗೆ 11.00 ಗಂಟೆಗೆ |

ಟೆಂಡರ್ ಫಾರಂಗಳನ್ನು ರೂ.25–00 ಪಾವತಿ ಮಾಡಿ ಈ ಕಛೇರಿ ಅಥವಾ ಆಯಾಯ ಕ್ಷೇತ್ರಗಳ ಕ್ಷೇತ್ರಾಧಿಕಾರಿಗಳ ಕಛೇರಿಯಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು. ಟೆಂಡರ್‌ದಾರರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ 50 ಶೇಕಡಾ ಭಾಗದ ಮೊತ್ತವನ್ನು ಪ್ರತ್ಯೇಕವಾಗಿ ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಕುಣಿಗಲ್ ನರ್ಸರಿಗೆ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಂಗಸ್ವಾಮಿಗುಡ್ಡ ಕ್ಷೇತ್ರ ರವರಿಗೆ ಹಾಗೂ ಉಳಿಕೆ ಎಲ್ಲಾ ಕ್ಷೇತ್ರಗಳಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ತುಮಕೂರು ರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ತಾವು ದಾಖಲಿಸುವ ಮೊತ್ತ, ಹೆಸರು, ವಿಳಾಸಗಳನ್ನು ಭರ್ತಿ ಮಾಡಿ ಸಹಿ, ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಮೊಹರು ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಸಂಬಂಧಪಟ್ಟ ಕ್ಷೇತ್ರಗಳ ಕಛೇರಿಯಲ್ಲಿ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಪ್ರತ್ಯೇಕವಾಗಿ ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ಟೆಂಡರ್ ಯಾ ಹರಾಜು ಪ್ರಕ್ರಿಯೆಯಲ್ಲಿ ಅತಿ ಹೆಚ್ಚಿನ ಮೊತ್ತವಾದ ಒಂದು ಮಾತ್ರ

ಪರಿಗಣಿಸಲಾಗುವುದು. ಅತೀ ಹೆಚ್ಚಿನ ಹರಾಜು ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇಕಡಾ 50 ಭಾಗದ ಮೊತ್ತವನ್ನು ಅಲ್ಲಿಯೇ ಡಿಡಿ ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್ ಯಾ ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊಬಲಗನ್ನು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬಹುದು. ಟೆಂಡರ್ ಯಾ ಬಹಿರಂಗ ಹರಾಜು ಅನುಮೋದಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳನ್ನು, ನಿಬಂಧನೆ ಮತ್ತು ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,

ಪಿ.ಆರ್.800 (ರಾಜ್ಯವಲಯ) ತುಮಕೂರು.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 162 ಡಿಟಿಇ 2010(4), ಬೆಂಗಳೂರು, ದಿನಾಂಕ:25ನೇ ನವೆಂಬರ್, 2010**

ಕರ್ನಾಟಕ ಲೋಕಸೇವಾ ಆಯೋಗದಿಂದ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ಕಂಪ್ಯೂಟರ್ ಸೈನ್ಸ್ ಇಂಜಿನಿಯರಿಂಗ್ ವಿಭಾಗದ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಆಯ್ಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಗಳು ದಿನಾಂಕ:28.09.2010ರಂದು ನಡೆದ ಕೌನ್ಸಿಲಿಂಗ್‌ನಲ್ಲಿ ಸ್ಥಳ ಆಯ್ಕೆ ಮಾಡಿಕೊಂಡಿರುವಂತೆ ರೂ.12,000–18,300/–ರ ಎಐಸಿಟಿಇ ವೇತನ ಶ್ರೇಣಿಯಲ್ಲಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ:ಶ್ರೀಮತಿ | ನೇಮಿಸಲಾದ ಸ್ಥಳ |
|---|---|---|
| 1 | 2 | 3 |
| 1. | ವೀರೇಶ್, ಮನೆ ನಂ.1–1–30/35ಡಿ, ಉದಯನಗರ, ಸ್ಟೇಷನ್ ರೋಡ್, ರಾಯಚೂರು–584101 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ರಾಯಚೂರು |
| 2. | ಜ್ಞಾನೇಶ್ವರಿ ಜಿ.ಆರ್ D/o ಜಿ. ಕುಮಾರಗೌಡ, ಗಣೇಶ ನಿವಾಸ, 279, 2ನೇ ಕ್ರಾಸ್, ಬಲ, ಕಪ್ಪಗಾಳ ರೋಡ್, ಎಂ.ವಿ.ನಗರ, ಬಳ್ಳಾರಿ–583102. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹೂವಿನಹಡಗಲಿ |
| 3. | ಶಬೀನ್ ತಾಜ್ ಜಿ.ಎ. ನಂ.01, 2ನೇ ಬಿ ಕ್ರಾಸ್, ಹನುಮಂತಪ್ಪ ಲೇಔಟ್, 114 ಬಸ್‌ಸ್ಟಾಪ್ ಎದುರು, ಆರ್.ಟಿ.ನಗರ, ಸುಲ್ತಾನಪಾಳ್ಯ, ಬೆಂಗಳೂರು–560032. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ರಾಮನಗರ |
| 4. | ಗೋಪಾಲ, #196, 10ನೇ ಮುಖ್ಯರಸ್ತೆ, 10ನೇ ಕ್ರಾಸ್, ಎನ್‌ಜಿಇಎಫ್ ಲೇಔಟ್, ನೃಪತುಂಗ ನಗರ, ನಾಗರಭಾವಿ, ಬೆಂಗಳೂರು–560076. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಚಾಮರಾಜನಗರ |
| 5. | ಸುರೇಖ ವಿ. #712, 10ನೇ ಕ್ರಾಸ್, ವಿನಯ ಮಾರ್ಗ, ಸಿದ್ದಾರ್ಥ ಲೇಔಟ್, ಮೈಸೂರು–570011. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಕುಶಾಲನಗರ |

ಸದರಿ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೊಳಪಟ್ಟಿರುತ್ತವೆ.

1) ಇವರನ್ನು ಎರಡು ವರ್ಷಗಳ ಪರಿವೀಕ್ಷಣಾ ಅವಧಿಗೆ ಒಳಪಡಿಸಲಾಗಿರುತ್ತದೆ.
2) ಈ ನೇಮಕಾತಿ ತಾತ್ಕಾಲಿಕವಾಗಿದ್ದು ಆಗಿಂದಾಗ್ಗೆ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3) ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ಹಾಗೂ ನಡತೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4) ಕರ್ನಾಟಕ ಸೇವಾ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಗಳ (1974)ರ ಅಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಇತರೆ ಪರೀಕ್ಷೆಗಳಲ್ಲಿ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5) ಇವರ ಸೇವಾ ಜೇಷ್ಠತೆಯು ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗದ ಆಯಾಯ ವಿಷಯದಲ್ಲಿ ನಿರ್ಧರಿಸಿದಂತೆ ಇರತಕ್ಕದ್ದು. ನಂತರ ಕರ್ನಾಟಕ ಲೋಕಸೇವಾ ಆಯೋಗವು ಕ್ರೋಢೀಕೃತ ಜೇಷ್ಠತಾ ಪಟ್ಟಿಯಲ್ಲಿ ನಿಗದಿಪಡಿಸಿದಂತೆ ಹಾಗೂ ತದನಂತರ ಹಾಗೂ ಸರ್ಕಾರ ಹೊರಡಿಸುವ ಅಧಿಸೂಚನೆಯಲ್ಲಿ ಇರತಕ್ಕದ್ದು.
6) ಇವರ ನೇಮಕಾತಿಯು ಪ್ರಸ್ತಾಪಿತ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ:1927/09, 1929–1959/2009, 1381–83/2010, 3057–/10, 3058/10, 3059/10, 5597–5600/2010, 1824/2010 ಮತ್ತು 5454/2010ರ ಪ್ರಕರಣಗಳಲ್ಲಿನ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

7) ನೇಮಿಸಲಾದ ಸ್ಥಳಗಳಿಗೆ ನೇಮಕಾತಿ ಆದೇಶವನ್ನು ಸ್ವೀಕರಿಸಿದ 15 ದಿನಗಳೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

8) ಗುಣ ನಡತೆ ಪ್ರಮಾಣ ಪತ್ರ ಬಂದಿಲ್ಲದಿರುವ ಪ್ರಕರಣಗಳಲ್ಲಿ ಗುಣ ನಡತೆ ಪ್ರಮಾಣ ಪತ್ರ ಬಂದಾಗ ಅದರಲ್ಲಿ ನ್ಯೂನತೆ ಕಂಡುಬಂದಲ್ಲಿ ಅಂತಹ ನೇಮಕಾತಿಗಳು ಆದೇಶ ತಂತಾನೇ ರದ್ದಾಗುತ್ತದೆ.

9) ಪಿಹೆಚ್‌ಡಿ ಪಡೆಯದ ಅಭ್ಯರ್ಥಿಗಳು ಸೇವೆಗೆ ಸೇರಿದ ಏಳು ವರ್ಷಗಳ ಅವಧಿಯೊಳಗೆ ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪಿಹೆಚ್‌ಡಿ ಪದವಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.794

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಕರ್ನಾಟಕ ಲೋಕಸೇವಾ ಆಯೋಗ**

**'ಉದ್ಯೋಗ ಸೌಧ, ಬೆಂಗಳೂರು–560 001**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಇ(2)770/2010–11/ಪಿಎಸ್‌ಸಿ, ದಿನಾಂಕ:4ನೇ ಡಿಸೆಂಬರ್, 2010**

**ವಿಷಯ:** ಅಬಕಾರಿ ಇಲಾಖೆಯ 254 ಅಬಕಾರಿ ಉಪ ನಿರೀಕ್ಷಕರ ಹುದ್ದೆಗಳ ಆಯ್ಕೆ ಕುರಿತು.

**ಉಲ್ಲೇಖ:**1) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)30/2002–03/ಪಿಎಸ್‌ಸಿ, ದಿನಾಂಕ:30.07.2002.

2) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)167/2003–04/ಪಿಎಸ್‌ಸಿ, ದಿನಾಂಕ:06.02.2004.

3) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)01/2005–06/ಪಿಎಸ್‌ಸಿ, ದಿನಾಂಕ:05.04.2005.

4) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)26/2006–07/ಪಿಎಸ್‌ಸಿ, ದಿನಾಂಕ:18/23.05.2006.

5) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)332/2008–09/ಪಿಎಸ್‌ಸಿ, ದಿನಾಂಕ:12.08.2008.

6) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)679/2010–11/ಪಿಎಸ್‌ಸಿ, ದಿನಾಂಕ:27.10.2010.

7) ಆಯೋಗದ ಅಧಿಸೂಚನೆ ಸಂಖ್ಯೆ: ಇ(2)760/2010–11/ಪಿಎಸ್‌ಸಿ, ದಿನಾಂಕ:25.11.2010.

8) ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶ ಸಂಖ್ಯೆ:323/2003, ದಿನಾಂಕ:21.09.2010.

ಆಯೋಗವು ಉಲ್ಲೇಖ–(1)ರ ಅಧಿಸೂಚನೆಯಲ್ಲಿ ಅಬಕಾರಿ ಇಲಾಖೆಯ 254 ಅಬಕಾರಿ ಉಪ ನಿರೀಕ್ಷಕರ ಹುದ್ದೆಗಳಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ನಂತರ ಉಲ್ಲೇಖ–(2)ರ ಅಧಿಸೂಚನೆಯಲ್ಲಿ ಸದರಿ ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಯಿತು. ಆದರೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿನ ಅರ್ಜಿಗಳಿಗೆ ಸಂಬಂಧಿಸಿದಂತೆ, ಸಾ.ಅ/ಮಾ.ಸೈ–4 ಹುದ್ದೆಗಳು 2ಎ/ಮಾ.ಸೈ–2 ಹುದ್ದೆ, 2ಬಿ/ಮಾ.ಸೈ–1 ಹುದ್ದೆ, ಸಾ.ಅ./ಯೋ.ಅ–1 ಹುದ್ದೆ ಹಾಗೂ ಪ.ಜಾ/ಇತರೆ–1 ಹುದ್ದೆ ಒಟ್ಟು 09 ಹುದ್ದೆಗಳನ್ನು ಬಾಕಿ ಇಡಲಾಗಿತ್ತು.

ನಂತರ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶಗಳ ಹಿನ್ನೆಲೆಯಲ್ಲಿ ದಿನಾಂಕ:18/23–25–2006 ಮತ್ತು 12–08–2008ರ ಹಾಗೂ 25–11.2010ರ ಅಧಿಸೂಚನೆಯಲ್ಲಿ ಒಟ್ಟು 09 ಹುದ್ದೆಗಳಿಗೂ ಅರ್ಹ ಅಭ್ಯರ್ಥಿಗಳನ್ನು ಆಯ್ಕೆಮಾಡಿ ಪ್ರಕಟಿಸಲಾಗಿದೆ. ಆದರೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಶ್ರೀ ಮಧುಸೂಧನ ರೆಡ್ಡಿ ಇವರ ರಿಟ್ ಅರ್ಜಿ ಸಂಖ್ಯೆ:323/03 (I A No.5) ರಲ್ಲಿ ದಿನಾಂಕ:21.09.2010ರಂದು ಆದೇಶವನ್ನು ಹೊರಡಿಸಿದ್ದು, ಸರ್ವೋಚ್ಚ ನ್ಯಾಯಾಲಯದ C A 3132/2007ರಲ್ಲಿ ನೀಡಿರುವ ಆದೇಶದಂತೆ 254 ಅಬಕಾರಿ ಉಪ ನಿರೀಕ್ಷಕರ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ ಶ್ರೀ ಮಧುಸೂಧನ ರೆಡ್ಡಿ ಇವರ ಜೇಷ್ಠತೆಯನ್ನು ಪರಿಷ್ಕರಿಸುವಂತೆ ಸೂಚಿಸಿರುವ ಹಿನ್ನೆಲೆಯಲ್ಲಿ ಆಯೋಗವು ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ ಶ್ರೀ ಮಧುಸೂಧನ ರೆಡ್ಡಿ ಅವರ ಜೇಷ್ಠತೆಯನ್ನು ಈ ಕೆಳಗಿನಂತೆ ನಿಗದಿಪಡಿಸಿದೆ.

| ಮುಖ್ಯಪಟ್ಟಿ | | | | | |
|---|---|---|---|---|---|
| **ಕ್ರ.ಸಂ.** | **ಅಭ್ಯರ್ಥಿಯ ಹೆಸರು** | **ಮೀಸಲಾತಿ** | **ಅಂಕ** | **ಜನ್ಮ ದಿನಾಂಕ** | **ಆಯ್ಕೆ ಪಟ್ಟಿಯಲ್ಲಿನ ಜೇಷ್ಠತೆ** |
| 1. | ಶ್ರೀ ಜಿ.ಎಸ್. ಮಧುಸೂಧನ ರೆಡ್ಡಿ, (ನೋಂ.ಸಂ.77580) S/o ಜಿ.ಸಿ. ಶಾಂತಾರೆಡ್ಡಿ, ನಂ.772/2, 2ನೇ ಮುಖ್ಯರಸ್ತೆ, 6ನೇ ಕ್ರಾಸ್, ಎಲ್.ಎನ್. ಕಾಲೋನಿ, ಯಶವಂತಪುರ, ಬೆಂಗಳೂರು–560022. | ಸಾ.ಅ | 147 | 21.12.1975 | ಆಯೋಗದ ಅಧಿಸೂಚನೆ ಸಂಖ್ಯೆ:ಇ(2)167/2003–04/ಪಿಎಸ್‌ಸಿ, ದಿನಾಂಕ:06.02.2004ರಲ್ಲಿ ಪ್ರಕಟಿಸಿದ ಮುಖ್ಯ ಆಯ್ಕೆ ಪಟ್ಟಿಯಲ್ಲಿ ಶ್ರೀ ಮಧುಸೂಧನ ರೆಡ್ಡಿ ಇವರ ಜೇಷ್ಠತೆಯು ಕ್ರ.ಸಂ.42ರಲ್ಲಿ ಆಯ್ಕೆಯಾದ ಶ್ರೀ ಜಗದೀಶ್ ಇನಾಮದಾರ್ ಇವರಿಗಿಂತ ಮುಂಚಿನದಾಗಿರುತ್ತದೆ. |

ಆಯೋಗದ ಆದೇಶದ ಮೇರೆಗೆ,

**ವಿ.ಬಿ. ಪಾಟೀಲ್**

ಪಿ.ಆರ್.789

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ.